

# ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 12-03-2021 ಪ್ರಶ್ನೆ ಸಂಖ್ಯೆ : 872 (1123)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಎಂ. ನಾರಾಯಣಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 12-03-2021

ಉತ್ತರಿಸುವ ಸಚಿವರು : ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು

ವಿಷಯ : ಬೆಂಗಳೂರು ನಗರದಲ್ಲಿರುವ ವೃದ್ಧಾಶ್ರಮಗಳು ಹಾಗೂ ಅನಾಥಾಶ್ರಮಗಳ ಬಗ್ಗೆ

(ಅ) ಬೆಂಗಳೂರು ನಗರದಲ್ಲಿರುವ ಸರ್ಕಾರಿ ವೃದ್ಧಾಶ್ರಮಗಳ ಹಾಗೂ ಮಕ್ಕಳ ಅನಾಥಾಶ್ರಮಗಳ ಸಂಖ್ಯೆ ಎಷ್ಟು ; (ವಿಳಾಸಗಳೊಂದಿಗೆ ಮಾಹಿತಿಯನ್ನು ನೀಡುವುದು)

(ಆ) ಪ್ರಸ್ತುತ ಬೆಂಗಳೂರು ನಗರ ಜಿಲ್ಲೆಯ ವೃದ್ಧಾಶ್ರಮಗಳಲ್ಲಿ ಒಟ್ಟು ಎಷ್ಟು ಜನ ನಿರಾಶ್ರಿತರು/ಹಿರಿಯ ನಾಗರಿಕರು ಹಾಗೂ ನಿರಾಶ್ರಿತ ಅನಾಥ ಮಕ್ಕಳು ಆಶ್ರಯ ಪಡೆಯುತ್ತಿದ್ದಾರೆ ;

(ಇ) ವೃದ್ಧಾಶ್ರಮಗಳಲ್ಲಿ ಹಿರಿಯ ನಾಗರಿಕರಿಗೆ ಹಾಗೂ ಸರ್ಕಾರಿ ಮಕ್ಕಳ ಅನಾಥಾಶ್ರಮಗಳಲ್ಲಿನ ನಿರಾಶ್ರಿತ ಮಕ್ಕಳಿಗೆ ನೀಡುತ್ತಿರುವ ಸೌಲಭ್ಯಗಳು ಹಾಗೂ ಸೌಕರ್ಯಗಳೇನು ; (ಸಂಪೂರ್ಣ ಮಾಹಿತಿಯನ್ನು ನೀಡುವುದು)

(ಈ) ಬೆಂಗಳೂರು ನಗರ ಜಿಲ್ಲೆಯಲ್ಲಿನ ಸರ್ಕಾರಿ ಮಕ್ಕಳ ಅನಾಥಾಶ್ರಮಗಳಲ್ಲಿನ ನಿರಾಶ್ರಿತ ಮಕ್ಕಳಲ್ಲಿ ಇದುವರೆಗೂ ಎಷ್ಟು ಮಕ್ಕಳನ್ನು ದತ್ತು ತೆಗೆದುಕೊಳ್ಳಲಾಗಿದೆ ; ದತ್ತು ಪಡೆದುಕೊಳ್ಳುವ ಪ್ರಕ್ರಿಯೆಯಲ್ಲಿ ಯಾವ ಮಾನದಂಡಗಳನ್ನು ಅನುಸರಿಸಲಾಗುತ್ತಿದೆ? (ಸಂಪೂರ್ಣ ಮಾಹಿತಿಯನ್ನು ನೀಡುವುದು)